# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೭ | ಬೆಂಗಳೂರು, ಗುರುವಾರ, ನವೆಂಬರ್ ೮, ೨೦೧೨ (ಕಾರ್ತೀಕ ೧೭, ಶಕ ವರ್ಷ ೧೯೩೪) | ಸಂಚಿಕೆ ೪೪ |
|---|---|---|


## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ:** ಬೆಂಗಳೂರಿನ ಕೊಡವ ಸಮಾಜ ಇವರಿಗೆ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲಾ ಹೋಬಳಿ, ಹೊಸಹಳ್ಳಿ ಗ್ರಾಮದಲ್ಲಿ ಸರ್ಕಾರಿ ಜಮೀನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** (1) ಪತ್ರ ಸಂಖ್ಯೆ: ಎಲ್.ಎನ್.ಡಿ(ಎನ್.ಎ)/ಸಿ.ಆರ್/ 203/2009-10 ದಿನಾಂಕ:04-02-2012.

(2) ಪತ್ರ ಸಂಖ್ಯೆ: ಕೆ.ಪಿ.ಎಲ್.ಸಿ/03/12-13 ದಿನಾಂಕ:16-05-2012.

**ಪ್ರಸ್ತಾವನೆ:**

ಅಧ್ಯಕ್ಷರು, ಕೊಡವ ಸಮಾಜ (ರಿ), ಬೆಂಗಳೂರು ಇವರು ಮನವಿ ಸಲ್ಲಿಸುತ್ತಾ, ಕೊಡವ ಸಮಾಜದ ವತಿಯಿಂದ ವೃದ್ಧಾಶ್ರಮವನ್ನು ಬಾಡಿಗೆ ಕಟ್ಟಡದಲ್ಲಿ ನಡೆಸುತ್ತಿದ್ದು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲಾ ಹೋಬಳಿ, ಹೊಸಹಳ್ಳಿ ಗ್ರಾಮದ ಸ.ನಂ.21 ರಲ್ಲಿ 7 ಎಕರೆ ಜಮೀನನ್ನು ಕೊಡವ ಸಮಾಜದ ವತಿಯಿಂದ ಶಾಲೆ, ವೃದ್ಧಾಶ್ರಮ ಹಾಗೂ ಆಸ್ಪತ್ರೆ ನಡೆಸುವ ಸಲುವಾಗಿ ಮಂಜೂರು ಮಾಡುವಂತೆ ದಿನಾಂಕ: 09.11.2011ರ ಮನವಿಯಲ್ಲಿ ಕೋರಿರುತ್ತಾರೆ.

ಜಿಲ್ಲಾಧಿಕಾರಿ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ಪತ್ರ ಬರೆಯುತ್ತಾ, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಆವಲಹಳ್ಳಿ ಗ್ರಾಮದ ಸ.ನಂ.79 ರಲ್ಲಿ ಅರಣ್ಯ ಇಲಾಖೆ ನೀಲಗಿರಿ ಮರ ಬೆಳೆಸಿದ್ದು ಅರಣ್ಯ ಇಲಾಖೆಯ ವಶದಲ್ಲಿರುತ್ತದೆ. ಈ ಜಮೀನಿಗೆ ಬದಲಾಗಿ ಹೊಸಹಳ್ಳಿ ಗ್ರಾಮದ ಸ.ನಂ.21 ರಲ್ಲಿ ಒಟ್ಟು 194 ಎಕರೆ 34 ಗುಂಟೆ ಜಮೀನಿದ್ದು, ಸರ್ಕಾರಿ ಗೋಮಾಳ ಜಮೀನು ಎಂದು ವರ್ಗೀಕೃತವಾಗಿರುತ್ತದೆ. ಈ ಜಮೀನಿನ ಪೈಕಿ 32 ಎಕರೆ 14 ಗುಂಟೆ ಜಮೀನನ್ನು ಮೆ: ಎಂ.ವಿ.ಆರ್. ಸೆಕ್ಯೂರಿಟೀಸ್ ಪ್ರೈವೇಟ್ ಲಿಮಿಟೆಡ್, ಸಿಕಂದರಾಬಾದ್ ಇವರಿಗೆ ದಿನಾಂಕ: 09-03-2007 ರಂದು ಹರಾಜು ಮಾಡಲಾಗಿದ್ದು, ನಂತರ ಹರಾಜಿಗೆ ಸಂಬಂಧಿಸಿದಂತೆ ಸರ್ಕಾರಕ್ಕೆ ಸಂದಾಯ ಮಾಡಿದ್ದ ಶೇ.25% ಬಿಡ್ ಹಣವನ್ನು ವಾಪಾಸ್ ಮಾಡಿ ಆದೇಶ ಮಾಡಲಾಗಿರುತ್ತದೆ. ಸದರಿ ಜಮೀನು ಖಾಲಿ ಇದ್ದು ಈ 7 ಎಕರೆ ಜಮೀನನ್ನು ಕೊಡವ ಸಮಾಜ ಇವರಿಗೆ ಮಂಜೂರು ಮಾಡಲು ಜಿಲ್ಲಾಧಿಕಾರಿ, ಬೆಂಗಳೂರು ಇವರು ಶಿಫಾರಸ್ಸು ಮಾಡಿರುತ್ತಾರೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಜಮೀನುಗಳ ನಿಗಮ ನಿಯಮಿತ, ಬೆಂಗಳೂರು ಇವರು ಮೇಲೆ (2) ರಲ್ಲಿ ಓದಲಾದ ಪತ್ರ ಬರೆಯುತ್ತಾ ಕೊಡವ ಸಮಾಜಕ್ಕೆ 7-00 ಎಕರೆ ಸರ್ಕಾರಿ ಜಮೀನನ್ನು ಮಂಜೂರು ಮಾಡಬಹುದೆಂದು ತಿಳಿಸಿರುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 647 ಎಲ್‌ಜಿಬಿ 2011, ಬೆಂಗಳೂರು, ದಿನಾಂಕ:18-07-2012.**

ಬೆಂಗಳೂರು ಜಿಲ್ಲೆ ಉತ್ತರ (ಅಪರ) ತಾಲ್ಲೂಕು ಜಾಲಾ ಹೋಬಳಿ, ಹೊಸಹಳ್ಳಿ ಗ್ರಾಮದ ಸ.ನಂ.21 ರಲ್ಲಿ 7-00 ಎಕರೆ ಜಮೀನನ್ನು ಶಾಲೆ, ವೃದ್ಧಾಶ್ರಮ ಹಾಗೂ ಆಸ್ಪತ್ರೆ ಇವುಗಳನ್ನು ಕೊಡವ ಸಮಾಜ, ಬೆಂಗಳೂರು ಇವರ ವತಿಯಿಂದ ನಡೆಸಲು ಕರ್ನಾಟಕ ಭೂ ಮಂಜೂರಾತಿ ನಿಯಮಗಳ (1969) ನಿಯಮ 19(1)(ಎ) ಮತ್ತು 19(3) ರನ್ವಯ ಪ್ರಚಲಿತ ಮಾರುಕಟ್ಟೆ ದರದ ಶೇ.10 ರಷ್ಟು ವಿಧಿಸಿ ಆ ಮೊತ್ತವನ್ನು ಪ್ರತಿ ಎರಡು ವರ್ಷಗಳಿಗೊಮ್ಮೆ ಶೇ.10 ರಷ್ಟು ಹೆಚ್ಚಿಸುವ ಷರತ್ತು ವಿಧಿಸಿ 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ನೀಡಲು ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಕೆ.ರಾಮಸ್ವಾಮಿ**

**ಪಿ.ಆರ್.1844**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ(ಭೂ.ಮಂ).

## ಕಾರ್ಮಿಕ ಸಚಿವಾಲಯ

**ವಿಷಯ:** ರಾಜ್ಯದಲ್ಲಿರುವ ಸರ್ಕಾರಿ ಹಾಗೂ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳ ಪ್ರವೇಶ ಪದ್ಧತಿಯನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಕಾಇ 12 ಇಟಿಐ 1997 ದಿನಾಂಕ: 28/07/1997.
2. ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರ ಸಂಖ್ಯೆ ಉತನಿ/ ತರಬೇತಿ/ತ-2/ವಿವ-49/2011-12, ದಿ. 11-05-2012.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರಾಜ್ಯದ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ಅಭ್ಯರ್ಥಿಗಳ ಪ್ರವೇಶವನ್ನು ಎಸ್.ಎಸ್.ಎಲ್.ಸಿ ಹಾಗೂ ಪಿ.ಯು.ಸಿ (10+2) ಪರೀಕ್ಷೆಗಳಲ್ಲಿ ಸಂಬಂಧಿಸಿದ ವೃತ್ತಿಗೆ ನಿಗದಿಪಡಿಸಿದ ಶೈಕ್ಷಣಿಕ ಅರ್ಹತೆಯ ಅಂಕಗಳ ಆಧಾರದ ಮೇರೆಗೆ ಆಯ್ಕೆ ಮಾಡುವ ಪದ್ಧತಿಯನ್ನು ಜಾರಿಗೊಳಿಸಲಾಗಿತ್ತು ಮತ್ತು ಅಭ್ಯರ್ಥಿಗಳನ್ನು ಆಯ್ಕೆ ಮಾಡುವಾಗ ಮೀಸಲಾತಿ ನಿಯಮಗಳನ್ನು ಪಾಲಿಸಿ ಅಭ್ಯರ್ಥಿಗಳ ಆಯ್ಕೆಯನ್ನು ಜಿಲ್ಲಾವಾರು ಮಾಡಬೇಕು ಹಾಗೂ ಗ್ರಾಮೀಣ ಪ್ರದೇಶದ ಅಭ್ಯರ್ಥಿಗಳಿಗೆ ಲಭ್ಯವಿರುವ ಕೃಪಾಂಕವನ್ನು ನೀಡಬೇಕು ಎಂದು ಆದೇಶಿಸಲಾಗಿತ್ತು. ಈ ಆದೇಶದ ಪ್ರಕಾರ ಅರ್ಜಿ ನಮೂನೆಯನ್ನು ಕೈಯಾರೆ ನೀಡುವ ಹಾಗೂ ಮುಂದುವರೆದ ಪರಿಶೀಲನೆ ನಡೆಸುವ ಮತ್ತು ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಆಯ್ಕೆಯನ್ನು ಜಿಲ್ಲಾವಾರು ಮಾಡುವ ಪದ್ಧತಿಯನ್ನು ಕಳೆದ 14 ವರ್ಷದಿಂದ ಅನುಸರಿಸಲಾಗುತ್ತಿತ್ತು. ಇದರಿಂದಾಗಿ ವಿದ್ಯಾರ್ಥಿಗಳು ಅವರವರ ಜಿಲ್ಲೆಯಲ್ಲೆ ಇರುವ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಮತ್ತು ಅಲ್ಲೇ ಇರುವ ವೃತ್ತಿಗಳನ್ನು ಮಾತ್ರ ಆಯ್ಕೆ ಮಾಡಿಕೊಳ್ಳಬೇಕಾದ ಸಂದರ್ಭ ಸೃಷ್ಟಿಯಾಗಿದ್ದು, ತಮಗೆ ಬೇಕಾದ ಕೈಗಾರಿಕಾ ತರಬೇತಿ ಸಂಸ್ಥೆಗಳು / ವೃತ್ತಿಗಳನ್ನು ತಮ್ಮ ನೆರೆಯ ಜಿಲ್ಲೆಗಳು ಅಥವಾ ಬೇರೆ ಜಿಲ್ಲೆಗಳಿಂದ ಆಯ್ಕೆ ಮಾಡುವ ಅವಕಾಶದಿಂದ ವಂಚಿತರಾಗಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರದಲ್ಲಿ ಜಿಲ್ಲಾವಾರು ಆಯ್ಕೆ ಪದ್ಧತಿಯ ಬದಲಾಗಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗೆ ಪ್ರವೇಶ ಬಯಸಿ ಅರ್ಜಿ ಸಲ್ಲಿಸಿದ ರಾಜ್ಯದ ಯಾವುದೇ ಭಾಗದ ಅಭ್ಯರ್ಥಿಗಳಿಗೆ ಮೆರಿಟ್ ಕಮ್ ರಿಸರ್ವೇಷನ್ ಆಧಾರದಲ್ಲಿ ಪ್ರವೇಶ ಮಾಡಿಕೊಳ್ಳುವಂತೆ ಆದೇಶಿಸಿದ್ದಲ್ಲಿ ಸರ್ಕಾರಿ ಸಂಸ್ಥೆಗಳಿಗೆ ಪ್ರವೇಶ ಬಯಸುವ ರಾಜ್ಯದ ಎಲ್ಲಾ ಅಭ್ಯರ್ಥಿಗಳಿಗೆ ಸಮಾನಾವಕಾಶ ನೀಡಿ ಅಂತಹ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ತಾವು ಇಚ್ಛಿಸಿದ ವೃತ್ತಿಯಲ್ಲಿ ಹಾಗೂ ಸಂಸ್ಥೆಯಲ್ಲಿ ತರಬೇತಿ ಪಡೆಯುವ ಅವಕಾಶ ಕಲ್ಪಿಸಿದಂತಾಗುತ್ತದೆ ಎಂದು ತಿಳಿಸಿರುವರು. ಅಲ್ಲದೇ, ಈ ಆಯ್ಕೆ ಪದ್ಧತಿಯಿಂದ ಹೆಚ್ಚು ಅಂಕ ಹೊಂದಿರುವ ಬೇರೆ ಜಿಲ್ಲೆಯ ಅಭ್ಯರ್ಥಿಗಳಿಗೆ ಇಚ್ಛಿಸಿದ ವೃತ್ತಿಯಲ್ಲಿ ಸ್ಥಾನ ಅಥವಾ ಪ್ರವೇಶಾವಕಾಶವೇ ಸಿಗದೆ ಹೋಗುವುದರಿಂದ ಅನೇಕ ಪ್ರತಿಭಾವಂತ ಅಭ್ಯರ್ಥಿಗಳು ತಾವು ಇಚ್ಛಿಸಿದ ವೃತ್ತಿಯಲ್ಲಿ ತರಬೇತಿ ಪಡೆಯುವ ಅಥವಾ ಸಂಸ್ಥೆಯ ಪ್ರವೇಶಾವಕಾಶದಿಂದಲೇ ವಂಚಿತರಾಗುತ್ತಿದ್ದಾರೆ, ಆದ್ದರಿಂದ ಪ್ರಸ್ತುತ ಇರುವ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ಜಿಲ್ಲಾವಾರು ಪ್ರವೇಶದ ಆಯ್ಕೆ ಪದ್ಧತಿಯನ್ನು ರದ್ದುಪಡಿಸಿ ಸರ್ಕಾರಿ ಸಂಸ್ಥೆಗಳಿಗೆ ಪ್ರವೇಶ ಬಯಸಿ ಅರ್ಜಿ ಸಲ್ಲಿಸಿದ ಎಲ್ಲಾ ಅಭ್ಯರ್ಥಿಗಳಿಗೆ ಮೆರಿಟ್ ಕಮ್ ರಿಸರ್ವೇಷನ್ ಆಧಾರದಲ್ಲಿ ರಾಜ್ಯದ ಯಾವುದೇ ಸಂಸ್ಥೆಗಳಲ್ಲಿ ಪ್ರವೇಶ ಮಾಡಿಕೊಳ್ಳುವಂತೆ ಕೋರಿರುತ್ತಾರೆ.

ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು 1960ರಿಂದ ಪ್ರಾರಂಭಿಸಲಾಗಿದ್ದರೂ ಹಳೆಯ ಕೈಗಾರಿಕಾ ತರಬೇತಿ ಸಂಸ್ಥೆಗಳು ಮತ್ತು ಹೊಸ ಕೈಗಾರಿಕಾ ತರಬೇತಿ ಸಂಸ್ಥೆಗಳು, ಗ್ರಾಮೀಣ ಕೈಗಾರಿಕಾ ತರಬೇತಿ ಸಂಸ್ಥೆಗಳು ಮತ್ತು ನಗರದಲ್ಲಿರುವ ಕೈಗಾರಿಕಾ ತರಬೇತಿ ಸಂಸ್ಥೆಗಳು, ಮುಂದುವರೆದ ಜಿಲ್ಲೆಗಳಾದ ಬೆಂಗಳೂರು, ಮೈಸೂರು, ದಕ್ಷಿಣ ಕನ್ನಡ, ಬೆಳಗಾಂ, ಕಾರವಾರ, ಬಳ್ಳಾರಿ, ಗುಲ್ಬರ್ಗಾ ಮುಂತಾದ ಕಡೆ ಇರುವ ಕೈಗಾರಿಕಾ ತರಬೇತಿ ಸಂಸ್ಥೆಗಳು ಮತ್ತು ಹಿಂದುಳಿದ ಪ್ರದೇಶದಲ್ಲಿರುವ ಕೈಗಾರಿಕಾ ತರಬೇತಿ ಸಂಸ್ಥೆಗಳು, ಇವುಗಳ ನಡುವೆ ಸೀಟುಗಳ ಸಂಖ್ಯೆ, ಲಭ್ಯವಿರುವ ವೃತ್ತಿಗಳು ಮತ್ತು ಮೂಲಭೂತ ಸೌಲಭ್ಯಗಳಿಗೆ ಸಂಬಂಧಿಸಿದಂತೆ ತುಂಬಾ ಅಂತರವಿರುತ್ತದೆ., ಕಳೆದ 14 ವರ್ಷಗಳಲ್ಲಿ ಹಲವಾರು ಕೈಗಾರಿಕಾ ತರಬೇತಿ ಸಂಸ್ಥೆಗಳು / ವೃತ್ತಿಗಳು / ಕೋರ್ಸ್‌ಗಳು ಹೊಸದಾಗಿ ಪ್ರಾರಂಭವಾಗಿರುತ್ತವೆ. ಅಲ್ಲದೇ, ತರಬೇತಿ ಪಡೆದವರಿಂದ ಕೈಗಾರಿಕೆಗಳು / ಉದ್ಯೋಗದಾತರ ನಿರೀಕ್ಷೆಗಳು ಮತ್ತು ಭಾವೀ

ಉದ್ಯೋಗಿಗಳ ನಿರೀಕ್ಷೆಗಳು ಗಮನೀಯವಾಗಿ ಬದಲಾಗಿದೆ. ಪ್ರಸ್ತುತದ ಸ್ಪರ್ಧಾತ್ಮಕ ಜಗತ್ತಿನಲ್ಲಿ ಉತ್ತಮ ಉದ್ಯೋಗಾವಕಾಶಗಳಿಗಾಗಿ ಕೌಶಲ್ಯ ತರಬೇತಿಯನ್ನು ಪಡೆಯಲು ಸಂಸ್ಥೆ ಮತ್ತು ವೃತ್ತಿಯ ಆಯ್ಕೆಯನ್ನು ತಾವೇ ಮಾಡಲು ವಿದ್ಯಾರ್ಥಿಗಳು ಇಚ್ಛಿಸುತ್ತಿದ್ದಾರೆ.

2012–13ನೇ ಸಾಲಿನ ಶೈಕ್ಷಣಿಕ ವರ್ಷದಲ್ಲಿ ರಾಜ್ಯದಲ್ಲಿ 158 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳು 40 ವೃತ್ತಿಗಳಲ್ಲಿ ಕೌಶಲ್ಯ ತರಬೇತಿಯನ್ನು ನೀಡುತ್ತಿದ್ದು, ಒಟ್ಟು 28,630 ಸೀಟುಗಳನ್ನು ಹೊಂದಿರುತ್ತವೆ. (16,539 ಸೀಟುಗಳು ಎನ್‌ಸಿವಿಟಿ ಸಂಯೋಜಿತ ವೃತ್ತಿಗಳಲ್ಲಿ 12,091 ಸೀಟುಗಳು ಎಸ್‌ಸಿವಿಟಿ ವೃತ್ತಿಗಳಲ್ಲಿ) ಹಾಗೆಯೇ 195 ಅನುದಾನಿತ ಖಾಸಗಿ ಕೈಗಾರಿಕಾ ತರಬೇತಿ ಸಂಸ್ಥೆಗಳಿದ್ದು, ಒಟ್ಟು 10,864 ಸೀಟುಗಳನ್ನು ಹೊಂದಿರುತ್ತವೆ. (ಎನ್‌ಸಿವಿಟಿ ಸಂಯೋಜಿತ ವೃತ್ತಿಗಳು).

ಪ್ರವೇಶಾತಿಗಾಗಿ ಕೈಯಾರೆ ಅರ್ಜಿಯನ್ನು ಸಲ್ಲಿಸುವುದು ಹಾಗೂ ಪ್ರವೇಶಾತಿ ಪ್ರಕ್ರಿಯೆಯನ್ನು ಪ್ರಾರಂಭಿಸುವುದು ಕ್ಲಿಷ್ಟಕರ ಮತ್ತು ಸಾಕಷ್ಟು ಸಮಯವನ್ನು ತೆಗೆದುಕೊಳ್ಳುತ್ತಿದ್ದು, ಹಲವಾರು ನ್ಯೂನತೆಗಳಿಂದ ಕೂಡಿರುತ್ತದೆ. ಆದುದರಿಂದ ಪ್ರವೇಶಾತಿ ಅರ್ಜಿಯನ್ನು ವೆಬ್–ಆಧಾರಿತ ಆನ್‌ಲೈನ್ ಮೂಲಕ ಸಲ್ಲಿಸುವುದು ಮತ್ತು ಸೀಟು ಆಯ್ಕೆ ಪ್ರಕ್ರಿಯೆಯನ್ನು ಅರ್ಹತೆ ಮತ್ತು ಮೀಸಲಾತಿಯ ಆಧಾರದ ಮೇರೆಗೆ ರಾಜ್ಯದಲ್ಲಿ ಇರುವ ಯಾವುದೇ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ / ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆ ಮತ್ತು ವೃತ್ತಿಯ ಆಯ್ಕೆಯನ್ನು ಲಭ್ಯವಿರುವ ಸ್ಥಾನ ಲಭ್ಯತಾ ಪಟ್ಟಿಯನ್ನು ಆಧರಿಸಿ ವಿದ್ಯಾರ್ಥಿಯು ಆತನ ಇಚ್ಛೆಯ ಅನುಸಾರ ಆನ್‌ಲೈನ್ ಮೂಲಕ ಆಯ್ಕೆ ಮಾಡುವುದು ಸೂಕ್ತ ಎನ್ನುವುದಾಗಿ ಭಾವಿಸಲಾಗಿದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ಕಾಇ 147 ಇಟಿಐ 2012 ಬೆಂಗಳೂರು, ದಿನಾಂಕ: 05/07/2012**

ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳು 2012–13ನೇ ಸಾಲಿನಿಂದ ಮತ್ತು ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳು 2013–14ನೇ ಸಾಲಿನಿಂದ ಸೀಟು ಹಂಚಿಕೆ ಪ್ರಕ್ರಿಯೆಯನ್ನು ವೆಬ್ ಆಧಾರಿತ ಆನ್‌ಲೈನ್ ಮೂಲಕ ಸ್ಥಾನ ಲಭ್ಯತಾ ಪಟ್ಟಿಯನ್ನು (seat matrix) ಆಧರಿಸಿ ಅರ್ಹತೆ ಮತ್ತು ಮೀಸಲಾತಿ ಆಧಾರದ ಮೇರೆಗೆ ರಾಜ್ಯದಲ್ಲಿ ಇರುವ ಯಾವುದೇ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಯನ್ನು ಮತ್ತು ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಯನ್ನು ಮತ್ತು ವೃತ್ತಿಯನ್ನು ವಿದ್ಯಾರ್ಥಿಯು ಆತನ ಇಚ್ಛೆಯ ಅನುಸಾರ ಆನ್‌ಲೈನ್ ಮೂಲಕ ಆಯ್ಕೆ ಮಾಡುವ ಪದ್ಧತಿಯನ್ನು ಜಾರಿಗೆ ತರಲು ಈ ಕೆಳಗಿನ ನಿಬಂಧನೆಗಳಿಗೆ ಒಳಪಡಿಸಿ ನಡೆಸಲು ಸರ್ಕಾರವು ಮಂಜೂರಾತಿ ನೀಡಿದೆ.

(i) ಪ್ರಸ್ತಾಪಿತ ಹೊಸ ವೆಬ್–ಆಧಾರಿತ ಆನ್‌ಲೈನ್ ಅರ್ಜಿ ಸಲ್ಲಿಸುವಿಕೆ ಮತ್ತು ಸೀಟು ಹಂಚಿಕೆಯ ಪ್ರಕ್ರಿಯೆಯು ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ 2012–13ನೇ ಶೈಕ್ಷಣಿಕ ವರ್ಷದಿಂದ (ಜುಲೈ–ಆಗಸ್ಟ್ 2012 ಪ್ರವೇಶಾತಿ ಸಮಯ) ಮತ್ತು ಅನುದಾನಿತ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ 2013–14ನೇ ಶೈಕ್ಷಣಿಕ ವರ್ಷದಿಂದ (ಮೇ–ಆಗಸ್ಟ್ 2013 ಪ್ರವೇಶಾತಿ ಸಮಯ) ಜಾರಿಗೆ ಬರಲಿದೆ.

(ii) ಎಲ್ಲಾ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಸುಮಾರು 40 ವಿವಿಧ ವೃತ್ತಿಗಳಲ್ಲಿ ನೀಡುತ್ತಿರುವ ತರಬೇತಿಗೆ ಸಂಬಂಧಿಸಿದ ಎನ್‌ಸಿವಿಟಿ ಸಂಯೋಜಿತ ವೃತ್ತಿಗಳ ಮತ್ತು ಎಸ್‌ಸಿವಿಟಿ ವೃತ್ತಿಗಳ ಲಭ್ಯವಿರುವ ಸ್ಥಾನಗಳಿಗೆ ಈ ಪದ್ಧತಿಯನ್ನು ಅನುಸರಿಸಲಾಗುವುದು.

(iii) ಸರ್ಕಾರದಿಂದ ಅನುದಾನ ಪಡೆಯುತ್ತಿರುವ ಎಲ್ಲಾ ಖಾಸಗಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಎನ್‌ಸಿವಿಟಿ ಅಡಿ ಸಂಯೋಜನೆ ಪಡೆದ ವೃತ್ತಿಗಳ ಅಡಿಯಲ್ಲಿನ ಸೀಟುಗಳಿಗೆ 2013–14ನೇ ಶೈಕ್ಷಣಿಕ ವರ್ಷದಿಂದ ಈ ಪದ್ಧತಿಯನ್ನು ಅನುಸರಿಸಲಾಗುವುದು.

(iv) ಸರ್ಕಾರದಿಂದ ಅನುದಾನ ಪಡೆಯುತ್ತಿರುವ ಎಲ್ಲಾ ಖಾಸಗಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಆಡಳಿತ ವರ್ಗವು ಶೇ. 30ರಷ್ಟು ಸೂಪರ್ ನ್ಯೂಮರರಿ ಸೀಟುಗಳನ್ನು ಡಿಜಿಇಟಿ, ಕೇಂದ್ರ ಸರ್ಕಾರವು ಕನಿಷ್ಟ ಅರ್ಹತೆ ಹಾಗೂ ವಯಸ್ಸು ಇತ್ಯಾದಿಗೆ ಸಂಬಂಧಿಸಿದಂತೆ ನೀಡಿರುವ ಮಾರ್ಗಸೂಚನೆಗಳಿಗೆ ಅನುಗುಣವಾಗಿ ತಮ್ಮ ಇಚ್ಛೆಯಂತೆ ಬಳಸಿಕೊಳ್ಳಬಹುದಾಗಿದೆ.

(v) ಸಾರ್ವಜನಿಕ ಖಾಸಗಿ ಸಹಭಾಗಿತ್ವದ ಎಲ್ಲಾ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಆಡಳಿತ ಸಮಿತಿಗಳು ಶೇ. 30ರಷ್ಟು ಸೂಪರ್ ನ್ಯೂಮರರಿ ಸೀಟುಗಳನ್ನು ಅವುಗಳಿಗೆ ನಿಗಧಿಪಡಿಸಿರುವ ಮಾರ್ಗಸೂಚನೆಗಳ ಪ್ರಕಾರ ಬಳಸಿಕೊಳ್ಳಬಹುದಾಗಿದೆ.

(vi) ವೆಬ್ ಆಧಾರಿತ ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸುವ ಅಭ್ಯರ್ಥಿಯು ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ, ಕರ್ನಾಟಕ ಸರ್ಕಾರ ಇವರು ಅಧಿಸೂಚಿಸುವ ರಾಜ್ಯದಲ್ಲಿನ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳು 2013–14ನೇ ಶೈಕ್ಷಣಿಕ ವರ್ಷದಿಂದ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ಲಭ್ಯವಿರುವ ಸ್ಥಾನ ಲಭ್ಯತಾ ಪಟ್ಟಿಯನ್ನು ಆಧರಿಸಿ (seat matrix) ತನ್ನ ಇಚ್ಛಾನುಸಾರ ಆಯ್ಕೆ ಮಾಡಬಹುದಾಗಿದೆ.

(vii) ಅಭ್ಯರ್ಥಿಗಳ ಆಯ್ಕೆಯು ನಿಗಧಿತ ವಿದ್ಯಾರ್ಹತೆಯಲ್ಲಿ (ಅಂದರೆ, ಎಸ್.ಎಸ್.ಎಲ್.ಸಿ ಅಥವಾ ಪಿ.ಯು.ಸಿ (10+2) ಇದರಲ್ಲಿ) ಪಡೆದ ಅಂಕಗಳ ಆಧಾರದ ಮೇರೆಗೆ ಮತ್ತು ಮೀಸಲಾತಿ ಪದ್ಧತಿಯ ಮೇರೆಗೆ ನಡೆಸಲಾಗುವುದು.

(viii) ವೆಬ್ ಆಧಾರಿತ ಪ್ರವೇಶಾತಿ ಮತ್ತು ಸೀಟು ಹಂಚಿಕೆಯ ಪ್ರಕ್ರಿಯೆಯನ್ನು ಪಾರದರ್ಶಕವಾಗಿ, ಸರಾಗವಾಗಿ ಮತ್ತು ಸಮರ್ಥವಾಗಿ ನಿರ್ವಹಿಸುವ ಸಲುವಾಗಿ ಕಾಲಕಾಲಕ್ಕೆ ಮಾರ್ಗಸೂಚನೆಗಳನ್ನು ನೀಡುವ ಅಧಿಕಾರವನ್ನು ಸರ್ಕಾರದ ಪೂರ್ವಾನುಮೋದನೆ ಪಡೆದು ಹೊರಡಿಸಲು ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರಿಗೆ ನೀಡಲಾಗಿದೆ.

(ix) ವೆಬ್ ಆಧಾರಿತ ಆನ್‌ಲೈನ್ ಪ್ರವೇಶಾತಿ ಮತ್ತು ಸೀಟು ಹಂಚಿಕೆ ಪ್ರಕ್ರಿಯೆಯಲ್ಲಿ ಭಾಗವಹಿಸಲು ಇಚ್ಛಿಸುವ ಅರ್ಜಿದಾರರಿಂದ 50 ರೂಪಾಯಿಯ ಶುಲ್ಕವನ್ನು ಪಡೆಯಲಾಗುವುದು. ಈ ಶುಲ್ಕವನ್ನು ಅಭ್ಯರ್ಥಿಯು ತನಗೆ ಸಮೀಪ ಇರುವ (ಸಮಾಲೋಚನೆ ಪೂರ್ವ) ದಾಖಲೆಗಳ ಪರಿಶೀಲನೆಯನ್ನು ನಡೆಸಲಾಗುವ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ನೀಡತಕ್ಕದ್ದು.

(x) ಪ್ರತಿ ಪ್ರವೇಶಾತಿ ಸಮಯದಲ್ಲಿ ಪ್ರವೇಶಾತಿ ಪ್ರಕ್ರಿಯೆಯ ವಿವಿಧ ಘಟ್ಟಗಳಿಗೆ ಸಂಬಂಧಿಸಿದಂತೆ ದಿನಾಂಕಗಳ ವಿವರಗಳು (Calender events) ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳು ಮತ್ತು ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ಸ್ಥಾನ ಲಭ್ಯತಾ ಪಟ್ಟಿ (seat matrix) ಪ್ರವೇಶಾತಿ ಪ್ರಕ್ರಿಯೆಯಲ್ಲಿ ಪಾಲಿಸಬೇಕಾದ ವಿಧಿವಿಧಾನಗಳನ್ನು ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರು ಅಧಿಸೂಚಿಸತಕ್ಕದ್ದು.

(xi) ಯಾವುದೇ ವಿಷಯದ ಬಗ್ಗೆ ಸಂಶಯ / ಅರ್ಥೈಸುವಿಕೆಯಲ್ಲಿ ಗೊಂದಲ ಅಥವಾ ಸ್ಪಷ್ಟೀಕರಣವು ಬೇಕಿದ್ದಲ್ಲಿ ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, ಕರ್ನಾಟಕ ಸರ್ಕಾರ ಇವರ ನಿರ್ಣಯವು ಅಂತಿಮವಾಗಿರುತ್ತದೆ.

(xii) ಈ ಮೇಲಿನ ವೆಬ್ ಆಧಾರಿತ ಆನ್‌ಲೈನ್ ಪ್ರವೇಶಾತಿ ಮತ್ತು ಸೀಟು ಹಂಚಿಕೆಯ ಪ್ರಕ್ರಿಯೆಯು ಡಿಜಿಇಟಿ ಉದ್ಯೋಗ ಮತ್ತು ತರಬೇತಿ ಮಂತ್ರಾಲಯ, ಭಾರತ ಸರ್ಕಾರ ಇವರು ಕಾಲಕಾಲಕ್ಕೆ ಹೊರಡಿಸಬಹುದಾದ ನೀತಿ ಮಾರ್ಗಸೂಚನೆಗಳಿಗೆ ಒಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಜೆ.ಎಸ್.ವಿಶ್ವನಾಥಪ್ಪ**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ.
(ಉದ್ಯೋಗ ಮತ್ತು ತರಬೇತಿ)

**ಪಿ.ಆರ್. 1836**

## ಕಾರ್ಮಿಕ ಸಚಿವಾಲಯ

**ವಿಷಯ:** ಖಾಸಗಿ ಅನುದಾನಿತ ಕೈಗಾರಿಕಾ ತರಬೇತಿ ಕೇಂದ್ರಗಳ ಸಿಬ್ಬಂದಿಗಳಿಗೆ 6ನೇ ವೇತನ ಆಯೋಗದ ಶಿಫಾರಸ್ಸಿನ ಅನ್ವಯ ಪರಿಷ್ಕೃತ ವೇತನ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 07 ಎಸ್‌ಆರ್‌ಪಿ 2012 ದಿನಾಂಕ: 21/04/2012.

2. ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರ ಸಂಖ್ಯೆ ಉತನಿ/ತರಬೇತಿ/ಯೋಜನೆ–1/ವಿವ–21/2012–13, ದಿನಾಂಕ: 02/07/2012.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 6ನೇ ವೇತನ ಆಯೋಗದ ಶಿಫಾರಸ್ಸಿನ ಅನ್ವಯ ಎಲ್ಲಾ ಸರ್ಕಾರಿ ಅಧಿಕಾರಿಗಳು ಮತ್ತು ನೌಕರರು ದಿನಾಂಕ: 01/04/2012ರಿಂದ ಪರಿಷ್ಕೃತ ವೇತನ ಸೌಲಭ್ಯ ಪಡೆಯಲು ಅರ್ಹರಿರುತ್ತಾರೆ. ಅಲ್ಲದೇ, ಸದರಿ ಆದೇಶದ ಕಂಡಿಕೆ 12 ಹಾಗೂ 12.1ರ ಅಡಿಯಲ್ಲಿ ಈ ಕೆಳಗಿನಂತೆ ನಮೂದಿಸಲಾಗಿದೆ.

"12. ಅನುದಾನ ಪಡೆಯುವ ಶಿಕ್ಷಣ ಸಂಸ್ಥೆಗಳ ನೌಕರರಿಗೆ, ವಿಶ್ವವಿದ್ಯಾಲಯಗಳ ಬೋಧಕೇತರ ಸಿಬ್ಬಂದಿಗೆ ಮತ್ತು ಸ್ಥಳೀಯ ಸಂಸ್ಥೆಗಳ (ಪಟ್ಟಣ) ನೌಕರರಿಗೆ ಪರಿಷ್ಕೃತ ವೇತನ ಶ್ರೇಣಿಗಳ ಪ್ರಯೋಜನಗಳ ವಿಸ್ತರಣೆ;"

"12.1 ಈ ಕುರಿತು ಆದೇಶಗಳನ್ನು ಸಂಬಂಧಪಟ್ಟ ಆಡಳಿತ ಇಲಾಖೆಗಳು ಪ್ರತ್ಯೇಕವಾಗಿ ಹೊರಡಿಸುತ್ತವೆ."

ಮೇಲೆ (2)ರಲ್ಲಿ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರದಲ್ಲಿ ರಾಜ್ಯದ ಉದ್ಯೋಗ ಮತ್ತು ತರಬೇತಿ ಇಲಾಖೆ ಅಡಿ ವೇತನ ಸಹಾಯಾನುದಾನ ನೀತಿ ಸಂಹಿತೆಗೆ ಒಳಪಟ್ಟು ಸಹಾಯಾನುದಾನವನ್ನು ಪಡೆಯುತ್ತಿರುವ 195 ಖಾಸಗಿ ಅನುದಾನಿತ ಕೈಗಾರಿಕಾ ತರಬೇತಿ ಕೇಂದ್ರಗಳ ಒಟ್ಟು 2388 ಸಿಬ್ಬಂದಿ ವರ್ಗದವರಿಗೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 07 ಎಸ್‌ಆರ್‌ಪಿ 2012 ದಿನಾಂಕ: 21/04/2012ರಲ್ಲಿ ನಿಗದಿಪಡಿಸಿರುವ ಪರಿಷ್ಕೃತ ವೇತನ ಶ್ರೇಣಿಯ ಸೌಲಭ್ಯವನ್ನು ನೀಡಲು ಅನುಮತಿಯನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ಕಾಇ 198 ಇಟಿಐ 2012 ಬೆಂಗಳೂರು, ದಿನಾಂಕ: 17/07/2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ರಾಜ್ಯದ ಉದ್ಯೋಗ ಮತ್ತು ತರಬೇತಿ ಇಲಾಖೆ ಅಡಿ ವೇತನ ಸಹಾಯಾನುದಾನ ನೀತಿ ಸಂಹಿತೆಗೆ ಒಳಪಟ್ಟು ಸಹಾಯಾನುದಾನವನ್ನು ಪಡೆಯುತ್ತಿರುವ ಖಾಸಗಿ ಅನುದಾನಿತ ಕೈಗಾರಿಕಾ ತರಬೇತಿ ಕೇಂದ್ರಗಳ ಸಿಬ್ಬಂದಿ ವರ್ಗದವರಿಗೆ ಸರ್ಕಾರಿ

ಆದೇಶ ಸಂಖ್ಯೆ: ಎಫ್‌ಡಿ 07 ಎಸ್‌ಆರ್‌ಪಿ 2012 ದಿನಾಂಕ: 21/04/2012ರಲ್ಲಿ ಹೊರಡಿಸಿರುವ 2012ರ ಕರ್ನಾಟಕ ನಾಗರೀಕ ಸೇವಾ (ಪರಿಷ್ಕೃತ ವೇತನ) ನಿಯಮಗಳನ್ನು ಹಾಗೂ ಸಂಬಂದಿತ ಆದೇಶಗಳನ್ನು ವಿಸ್ತರಿಸಲು ಸರ್ಕಾರದ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಜೆ.ಎಸ್.ವಿಶ್ವನಾಥಪ್ಪ**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ.

(ಉದ್ಯೋಗ ಮತ್ತು ತರಬೇತಿ)

**ಪಿ.ಆರ್. 1992**

## ಕಾರ್ಮಿಕ ಸಚಿವಾಲಯ

**ವಿಷಯ:**– ಕಾ.ರಾ.ವಿ. ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯ ಸಹಾಯಕ ದಂತ ಶಸ್ತ್ರ ಚಿಕಿತ್ಸಕರಿಗೆ ಕಾಲಬದ್ಧ ಪದೋನ್ನತಿ ಜಾರಿಗೆ ಬರುವ ದಿನಾಂಕವನ್ನು ಮತ್ತು ಪದನಾಮವನ್ನು ಪರಿಷ್ಕರಿಸುವ ಕುರಿತು.

**ಓದಲಾಗಿದೆ:**– 1) ಸರ್ಕಾರದ ಆದೇಶ ಸಂಖ್ಯೆ.ಕಾಇ 356 ಎಲ್‌ಎಸ್‌ಐ 1995, ದಿನಾಂಕ:04–09–2006.

2) ಸರ್ಕಾರದ ಆದೇಶ ಸಂಖ್ಯೆ.ಕಾಇ 266 ಎಲ್‌ಎಸ್‌ಐ 2008, ದಿನಾಂಕ:21–03–2012.

3) ಡಾ:ಆರ್.ಕೆ.ತೋಜೋವತಿ, ಡಾ:ಬಿಂದು ಶಿವರಾಂ ಮತ್ತು ಡಾ:ಕಾಂತಿ ಜಿ. ಇವರ ಮನವಿ ದಿನಾಂಕ:03–05 2012.

4) ಸರ್ಕಾರದ ಅಧಿಸೂಚನೆ ಸಂಖ್ಯೆ.ಕಾಇ 28 ಎಲ್‌ಎಸ್‌ಐ 2012 ದಿನಾಂಕ: 21–07–2012.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಕಾರ್ಮಿಕ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯಲ್ಲಿನ ವಿಮಾ ವೈದ್ಯಾಧಿಕಾರಿಗಳಿಗೆ ವೃಂದ ಮತ್ತು ನೇಮಕಾತಿ ತಿದ್ದುಪಡಿ ಷರತ್ತಿಗೊಳಪಟ್ಟು 6 ಮತ್ತು 13 ವರ್ಷದ ಕಾಲಬದ್ಧ ಪದೋನ್ನತಿಯನ್ನು ಮಂಜೂರು ಮಾಡಲಾಗಿದೆ.

ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸಹಾಯಕ ದಂತ ಚಿಕಿತ್ಸಕರಿಗೂ 6 ಮತ್ತು 13 ವರ್ಷದ ಕಾಲಬದ್ಧ ಪದೋನ್ನತಿ ಸೌಲಭ್ಯವನ್ನು ಷರತ್ತುಗಳಿಗೊಳಪಟ್ಟು ದಿನಾಂಕ:21–03–2012 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲಾಗಿದೆ.

ಮೇಲೆ ಓದಲಾದ (3)ರ ಪತ್ರದಲ್ಲಿ ಡಾ:ಆರ್.ಕೆ.ತೇಜೋವತಿ ಡಾ:ಬಿಂದುಶಿವರಾಂ ಮತ್ತು ಡಾ:ಕಾಂತಿ ಜಿ. ಹಾಗೂ ಮೇಲೆ ಓದಲಾದ (1)ರ ಸರ್ಕಾರದ ಆದೇಶ ಸಂಖ್ಯೆ.ಕಾಇ 356 ಎಲ್‌ಎಸ್‌ಐ 1995, ದಿನಾಂಕ:04–09–2006ರ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಕಾ.ರಾ.ವಿ. ಇಲಾಖೆಯ ವಿಮಾ ವೈದ್ಯಾಧಿಕಾರಿಗಳಿಗೆ 6 ಮತ್ತು 13 ವರ್ಷಗಳ ಕಾಲಬದ್ಧ ಪದೋನ್ನತಿ ಸೌಲಭ್ಯವನ್ನು ದಿನಾಂಕ:07–12–2007 ರಿಂದ ಜಾರಿಗೊಳಿಸಿರುವಂತೆ ಇಲಾಖೆಯ ಸಹಾಯಕ ದಂತ ಶಸ್ತ್ರ ಚಿಕಿತ್ಸಕರಿಗೂ 6 ಮತ್ತು 13 ವರ್ಷಗಳ ಕಾಲಬದ್ಧ ಪದೋನ್ನತಿ ಸೌಲಭ್ಯವನ್ನು ಪೂರ್ವಾನ್ವಯವಾಗಿ ದಿನಾಂಕ: 07–12–2007ರಿಂದಲೇ ಜಾರಿಗೆ ಬರುವಂತೆ ಮಂಜೂರು ಮಾಡಲು ಕೋರಿರುತ್ತಾರೆ.

ಮೇಲೆ ಓದಲಾದ (4)ರ ಸರ್ಕಾರದ ಅಧಿಸೂಚನೆಯ ಅನುಬಂಧ–4ರಲ್ಲಿನ ಡಾ:ಆರ್.ಕೆ.ತೇಜೋವತಿ, ಡಾ:ಬಿಂದುಶಿವರಾಂ ಮತ್ತು ಡಾ:ಜಿ.ಕಾಂತಿ ರವರಿಗೆ 6 ಮತ್ತು 13 ವರ್ಷದ ಕಾಲಬದ್ಧ ಪದೋನ್ನತಿ ಸೌಲಭ್ಯವನ್ನು ದಿನಾಂಕ:21–03–2012 ರಿಂದ ವಿಸ್ತರಿಸಿ ಆದೇಶಿಸಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ.ಕಾಇ 266 ಎಲ್‌ಎಸ್‌ಐ 2008, ಬೆಂಗಳೂರು, ದಿನಾಂಕ:04–08–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯ ಸಹಾಯಕ ದಂತ ಶಸ್ತ್ರ ಚಿಕಿತ್ಸಕರಿಗೆ 6 ಮತ್ತು 13 ವರ್ಷಗಳ ಕಾಲಬದ್ಧ ಪದೋನ್ನತಿ ಸೌಲಭ್ಯವನ್ನು ದಿನಾಂಕ:21–03–2012ರಿಂದ ಭವಿಷ್ಯವರ್ತಿಯಾಗಿ ವಿಸ್ತರಿಸಿರುವುದನ್ನು ಮಾರ್ಪಡಿಸಿ ಈ ಪದೋನ್ನತಿ ಸೌಲಭ್ಯವನ್ನು ದಿನಾಂಕ:07–12–2007 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಪರಿಷ್ಕರಿಸಲಾಗಿದೆ.

ಸರ್ಕಾರದ ಅಧಿಸೂಚನೆ ಸಂಖ್ಯೆ.ಕಾಇ 28 ಎಲ್‌ಎಸ್‌ಐ 2012, ದಿನಾಂಕ:21–07–2012ರ ಅಧಿಸೂಚನೆಯ ಅನುಬಂಧ–4ನ್ನು ಹಿಂಪಡೆಯಲಾಗಿದೆ.

ಈ ಪರಿಷ್ಕೃತ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ.FD 328 Ser–2/2012, ದಿನಾಂಕ:30–07–2012ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋವಿಂದಸ್ವಾಮಿ**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ.

(ಕಾರಾವಿ ಯೋ (ವೈ) ಸೇವೆಗಳು)

**ಪಿ.ಆರ್. 1971**

## ಕಂದಾಯ ಸಚಿವಾಲಯ

**ವಿಷಯ:** ಬೆಂಗಳೂರು ದಕ್ಷಿಣ ತಾಲ್ಲೂಕು, ತಾವರೆಕೆರೆ ಹೋಬಳಿ, ಕುರುಬರಹಳ್ಳಿಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ನಾಲ್ಕನೇ ದರ್ಜೆ ನೌಕರರ ಸಂಘಕ್ಕೆ ಜಮೀನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**

1) ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 503 ಎಲ್‌ಜಿಬಿ 2010 ದಿನಾಂಕ:11–05–2011.

2) ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 313 ಎಲ್‌ಜಿಬಿ 2011 ದಿನಾಂಕ:11–07–2011.

3) ಅಧ್ಯಕ್ಷರು, ಕರ್ನಾಟಕ ಸರ್ಕಾರ ಸಚಿವಾಲಯ ನಾಲ್ಕನೇ ದರ್ಜೆ ನೌಕರರ ಸಂಘ ಇವರು ಸಲ್ಲಿಸಿದ ದಿ:18–08–2012ರ ಮನವಿ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ನಾಲ್ಕನೇ ದರ್ಜೆ ನೌಕರರ ಹೆಸರಿನಲ್ಲಿ ಅಥವಾ ಕುಟುಂಬದ ಇತರೇ ಸದಸ್ಯರ ಹೆಸರಿನಲ್ಲಿ ಬೆಂಗಳೂರು ನಗರದಲ್ಲಿ ಯಾವುದೇ ವಸತಿ ಹಾಗೂ ನಿವೇಶನ ಹೊಂದದ ಅರ್ಹ ನೌಕರರಿಗೆ, ನಿವೇಶನ ಹಂಚಿಕೆ ಮಾಡುವುದಕ್ಕಾಗಿ ಬೆಂಗಳೂರು ದಕ್ಷಿಣ ತಾಲ್ಲೂಕು, ತಾವರೆಕೆರೆ ಹೋಬಳಿ, ಕುರುಬರಹಳ್ಳಿ ಗ್ರಾಮದ ಸ.ನಂ.89ರಲ್ಲಿನ 40.20 ಎಕರೆ ಗೋಮಾಳ ಜಮೀನಿನ ಪೈಕಿ 20 ಎಕರೆ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳ 1966 ನಿಯಮ 97(4)ರಡಿಯಲ್ಲಿನ ಅವಕಾಶದಂತೆ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ ಸದರಿ 20.00 ಎಕರೆ ಜಮೀನನ್ನು ಕರ್ನಾಟಕ ಸರ್ಕಾರ ಸಚಿವಾಲಯದ ನಾಲ್ಕನೇ ದರ್ಜೆ ನೌಕರರ ಸಂಘ (ರಿ) ಇವರಿಗೆ ಪ್ರಚಲಿತ ಮಾರುಕಟ್ಟೆ ದರ ಹಾಗೂ ನಿಯಮಗಳನ್ವಯ ಇತರೆ ಶುಲ್ಕ ವಿಧಿಸಿ ಮಂಜೂರು ಮಾಡಲಾಗಿತ್ತು.

ನಂತರ ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಬೆಂಗಳೂರು ದಕ್ಷಿಣ ತಾಲ್ಲೂಕು, ತಾವರೆಕೆರೆ ಹೋಬಳಿ, ಕುರುಬರಹಳ್ಳಿ ಗ್ರಾಮದ ಸ.ನಂ.89ರಲ್ಲಿ 20.00 ಎಕರೆ ಜಮೀನನ್ನು ಕರ್ನಾಟಕ ಸರ್ಕಾರ ಸಚಿವಾಲಯದ ನಾಲ್ಕನೇ ದರ್ಜೆ ನೌಕರರ ಸಂಘ (ರಿ) ಇವರಿಗೆ ವಸತಿ ಉದ್ದೇಶಕ್ಕಾಗಿ ಮಂಜೂರು ಮಾಡಲಾಗಿರುವ 20.00 ಎಕರೆ ಜಮೀನಿಗೆ ಸದರಿ ಜಮೀನಿನ ಪ್ರಚಲಿತ ಮಾರುಕಟ್ಟೆ ದರದ ಬದಲಾಗಿ ಮಾರ್ಗಸೂಚಿ ಬೆಲೆಯನ್ನು ವಿಧಿಸಿ ಬೆಂಗಳೂರು ದಕ್ಷಿಣ ತಾಲ್ಲೂಕು, ತಾವರೆಕೆರೆ ಹೋಬಳಿ, ಕುರುಬರಹಳ್ಳಿ ಗ್ರಾಮದ ಸ.ನಂ.89ರಲ್ಲಿ 20.00 ಎಕರೆ ಜಮೀನನ್ನು ಕರ್ನಾಟಕ ಸರ್ಕಾರ ಸಚಿವಾಲಯದ ನಾಲ್ಕನೇ ದರ್ಜೆ ನೌಕರರ ಸಂಘ (ರಿ) ಇವರಿಗೆ ವಸತಿ ಉದ್ದೇಶಕ್ಕಾಗಿ ಮಂಜೂರು ಮಾಡಲು ಆದೇಶಿಸಿದ್ದು, ಸದರಿ ಜಮೀನಿನಲ್ಲಿ ನಿವೇಶನಗಳನ್ನು ರಚಿಸಿ ಬಡಾವಣೆಗೆ / ಯೋಜನೆಗೆ ಸಂಬಂಧಪಟ್ಟ / ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆಯಲು ಸಾಕಷ್ಟು ಕಾಲಾವಕಾಶ ಬೇಕಾಗಿರುವ ಹಿನ್ನೆಲೆಯಲ್ಲಿ ಮೊದಲನೇ ಕಂತಾಗಿ ರೂ.1.00 ಕೋಟಿ ಮೊತ್ತವನ್ನು ಸಂಘವು ಪಾವತಿಸಿದ ನಂತರ ಜಮೀನಿನ ಸ್ವಾಧೀನವನ್ನು ಸಂಘಕ್ಕೆ ಹಸ್ತಾಂತರಿಸಲು, ಉಳಿದ ಮೊತ್ತವನ್ನು 6 ಕಂತುಗಳಲ್ಲಿ ಒಂದು ವರ್ಷ ಅವಧಿಯೊಳಗೆ ಪಾವತಿಸತಕ್ಕದ್ದು. ಒಂದು ವೇಳೆ, ಸಂಘವು ಸದರಿ ಜಮೀನಿನಲ್ಲಿ ನಿವೇಶನಗಳನ್ನು ರಚಿಸಿ, ಅದಕ್ಕೆ ಸಂಬಂಧಪಟ್ಟ ಪ್ರಾಧಿಕಾರದಿಂದ ಅನುಮೋದನೆ ಪಡೆಯದಿದ್ದಲ್ಲಿ ಹಾಗೂ ಜಮೀನಿಗೆ ನಿಗಧಿಪಡಿಸಲಾದ ದರದ ಉಳಿದ ಮೊತ್ತವನ್ನು ನಿಗಧಿತ ಕಂತುಗಳಲ್ಲಿ ಪಾವತಿಸದಿದ್ದಲ್ಲಿ ಸದರಿ ಜಮೀನಿನ ಮಂಜೂರಾತಿ ರದ್ದುಪಡಿಸಿ ಸರ್ಕಾರದ ವಶಕ್ಕೆ ತೆಗೆದುಕೊಳ್ಳಲಾಗುವುದೆಂದು ತಿಳಿಸಲಾಗಿತ್ತು.

ತದನಂತರ ಅಧ್ಯಕ್ಷರು, ಕರ್ನಾಟಕ ಸರ್ಕಾರ ಸಚಿವಾಲಯ ನಾಲ್ಕನೇ ದರ್ಜೆ ನೌಕರರ ಸಂಘ (ರಿ) ಇವರು ಮೇಲೆ (3)ರಲ್ಲಿ ಓದಲಾದ ಮನವಿ ಸಲ್ಲಿಸುತ್ತಾ, ಸದರಿ ಜಮೀನನ್ನು ಬಡಾವಣೆಯಾಗಿ ಪರಿವರ್ತಿಸಿ ಎಲ್ಲಾ ನಾಗರೀಕ ಸೌಲಭ್ಯಗಳನ್ನು ಒದಗಿಸಲು ಸುಮಾರು ರೂ.6.00 ಕೋಟಿಗಳಷ್ಟು ವೆಚ್ಚವಾಗುತ್ತದೆಂದು ಅಂದಾಜಿಸಲಾಗಿದೆ ಈ ಜಮೀನಿನಲ್ಲಿ ಸುಮಾರು 6–00 ಎಕರೆಯಷ್ಟು ಜಮೀನು ಕಲ್ಲು ಬಂಡೆಗಳಿಂದ ಕೂಡಿದ್ದು, ನಿವೇಶನ ಮಾಡುವುದು ಕಷ್ಟಕರ. ಅದಲ್ಲದೆ ಈ ಜಮೀನಿನಲ್ಲಿ ರಚಿಸಲಾದ ನಿವೇಶನಗಳನ್ನು 4ನೇ ದರ್ಜೆ ನೌಕರರುಗಳಿಗೆ ಮಾತ್ರ ಹಂಚಿಕೆ ಮಾಡಬೇಕಾಗಿರುವುದರಿಂದ ಅಂತಹ ನೌಕರರು ಆರ್ಥಿಕವಾಗಿ ಅಷ್ಟೊಂದು ಪ್ರಬಲವಾಗಿರದೇ ಇರುವ ಹಿನ್ನೆಲೆಯಲ್ಲಿ ನಿವೇಶನಗಳಿಗೆ ಹೆಚ್ಚುವರಿ ದರದಲ್ಲಿ ಹಣವನ್ನು ಪಾವತಿಸುವುದು ಕಷ್ಟವೆಂದು ತಿಳಿಸುತ್ತಾ, ಜಮೀನಿನ ಮಾರ್ಗಸೂಚಿ ಬೆಲೆ ಶೇಕಡ 50 ರಷ್ಟನ್ನು ಮಾತ್ರ ಮನರ್ ನಿಗಧಿಪಡಿಸಿ ಸಾಕಷ್ಟು 4ನೇ ದರ್ಜೆ ನೌಕರರು ಸದಸ್ಯತ್ವ ಪಡೆದು ಹಣ ಪಾವತಿಸದಿದ್ದಲ್ಲಿ 4ನೇ ದರ್ಜೆ ಹುದ್ದೆಯಿಂದ ಬಡ್ತಿ ಹೊಂದಿದ ಕಿರಿಯ ಸಹಾಯಕರು, ಬೆರಳಚ್ಚುಗಾರರು ಹಾಗೂ ವಾಹನ ಚಾಲಕರು ಇವರಿಗೆ ಸಹ ಸದಸ್ಯತ್ವವನ್ನು ನೀಡಿ ನಿವೇಶನಗಳನ್ನು ಹಂಚಿಕೆ ಮಾಡಲು ಅವಕಾಶ ಮಾಡಿಕೊಡಬೇಕೆಂದು ಕೋರಿರುತ್ತಾರೆ.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 642 ಎಲ್‌ಜಿಬಿ 2012, ಬೆಂಗಳೂರು, ದಿನಾಂಕ:18–10–2012.**

ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 313 ಎಲ್‌ಜಿಬಿ 2011, ದಿನಾಂಕ: 11–07–2011ನ್ನು ಭಾಗಶ: ಮಾರ್ಪಡಿಸಿ ಬೆಂಗಳೂರು ದಕ್ಷಿಣ ತಾಲ್ಲೂಕು, ತಾವರೆಕೆರೆ ಹೋಬಳಿ, ಕುರುಬರಹಳ್ಳಿ ಗ್ರಾಮದ ಸ.ನಂ.89ರಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ನಾಲ್ಕನೇ ದರ್ಜೆ ನೌಕರರ ಸಂಘ (ರಿ) ಇವರಿಗೆ ವಸತಿ ಉದ್ದೇಶಕ್ಕಾಗಿ ಮಂಜೂರು ಮಾಡಲಾಗಿರುವ 20.00 ಎಕರೆ ಜಮೀನಿಗೆ ಸದರಿ ಜಮೀನಿನ ಮಾರ್ಗಸೂಚಿ ಬೆಲೆಯ ಬದಲಾಗಿ ಮಾರ್ಗಸೂಚಿ ಬೆಲೆಯಲ್ಲಿ ಶೇಕಡ 50 ರಷ್ಟನ್ನು ಪಾವತಿಸಲು ಹಾಗೂ ಸಾಕಷ್ಟು 4ನೇ ದರ್ಜೆ ನೌಕರರು ಸದಸ್ಯತ್ವ ಪಡೆದು ಹಣ ಪಾವತಿಸದಿದ್ದಲ್ಲಿ ಮೂಲತ: ನಾಲ್ಕನೇ ದರ್ಜೆ ನೌಕರರಾಗಿದ್ದು ನಂತರ ನಾಲ್ಕನೇ ದರ್ಜೆ ನೌಕರರಿಂದ ಬಡ್ತಿ ಹೊಂದಿ ಕಿರಿಯ ಸಹಾಯಕರು, ಬೆರಳಚ್ಚುಗಾರರು ಹಾಗೂ ವಾಹನ ಚಾಲಕರು ಈ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ನೌಕರರಿಗೆ ಸಹ ಸದಸ್ಯತ್ವ ನೀಡಿ ನಿವೇಶನಗಳನ್ನು ಹಂಚಿಕೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಒಂದು ಪಕ್ಷ ಸಂಘವು ಸದರಿ ಜಮೀನಿನಲ್ಲಿ ನಿವೇಶನಗಳನ್ನು ರಚಿಸಿ ಅದಕ್ಕೆ ಸಂಬಂಧಪಟ್ಟ ಪ್ರಾಧಿಕಾರದಿಂದ ಅನುಮೋದನೆ ಪಡೆಯದಿದ್ದಲ್ಲಿ ಸದರಿ ಜಮೀನಿನ ಮಂಜೂರಾತಿ ರದ್ದುಪಡಿಸಿ ಜಮೀನನ್ನು ಸರ್ಕಾರದ ವಶಕ್ಕೆ ತೆಗೆದುಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಮಾದೇವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–1).

**ಪಿ.ಆರ್. 2158**

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಬನ್ನೇರುಘಟ್ಟ ಜೈವಿಕ ಉದ್ಯಾನವನ, ಬನ್ನೇರುಘಟ್ಟ, ಬೆಂಗಳೂರು ಇಲ್ಲಿ ಒಂದು ಉಪ ನಿರ್ದೇಶಕರು, ಪಶು ವೈದ್ಯ ಸೇವೆಗಳು ಹುದ್ದೆಯನ್ನು ತಾತ್ಕಾಲಿಕವಾಗಿ ಸೃಜಿಸುವ ಬಗ್ಗೆ.

**ಓದಲಾಗಿದೆ:** ಕಾರ್ಯನಿರ್ವಾಹಕ ನಿರ್ದೇಶಕರು, ಬನ್ನೇರುಘಟ್ಟ ಜೈವಿಕ ಉದ್ಯಾನವನ, ಬೆಂಗಳೂರು ಇವರ ಪತ್ರ ಸಂಖ್ಯೆ: ಎ4/ಬಬಪಾ/ಸಿಬ್ಬಂದಿ/ವರ್ಗ/ಜಿಎಲ್–1/2012, ದಿನಾಂಕ: 21.05.2012

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 21.05.2012 ರ ಪತ್ರದಲ್ಲಿ ಕಾರ್ಯನಿರ್ವಾಹಕ ನಿರ್ದೇಶಕರು, ಬನ್ನೇರುಘಟ್ಟ ಜೈವಿಕ ಉದ್ಯಾನವನ, ಬನ್ನೇರುಘಟ್ಟ, ಬೆಂಗಳೂರು ಇವರು ಬನ್ನೇರುಘಟ್ಟ ಜೈವಿಕ ಉದ್ಯಾನವನಕ್ಕೆ ಪಶುಪಾಲನಾ ಮತ್ತು ಪಶು ವೈದ್ಯ ಸೇವಾ ಇಲಾಖೆಯಲ್ಲಿ ಸ್ಥಳ ನಿರೀಕ್ಷೆಯಲ್ಲಿದ್ದ ಡಾ॥ ಸಿ.ವಿ. ರಾಮಚಂದ್ರ ಇವರನ್ನು ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 206 ಪಅಸೇ 2011, ದಿನಾಂಕ: 07–05–2012 ರಲ್ಲಿ ಪಶು ವೈದ್ಯ ಉಪ ನಿರ್ದೇಶಕರನ್ನಾಗಿ ನಿಯೋಜನೆ ಮೇಲೆ ವರ್ಗಾಯಿಸಿದ್ದು, ಸದರಿಯವರು ಪಶುಪಾಲನಾ ಮತ್ತು ಪಶು ವೈದ್ಯ ಸೇವಾ ಇಲಾಖೆಯಿಂದ ದಿನಾಂಕ: 14–05–2012ರಂದು ಬಿಡುಗಡೆ ಹೊಂದಿ ಬನ್ನೇರುಘಟ್ಟ ಜೈವಿಕ ಉದ್ಯಾನವನ, ಬೆಂಗಳೂರು ಇಲ್ಲಿ ಉಪ ನಿರ್ದೇಶಕರಾಗಿ ದಿನಾಂಕ: 21–05–2012ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು ತಿಳಿಸಿ, ಬನ್ನೇರುಘಟ್ಟ ಜೈವಿಕ ಉದ್ಯಾನವನದಲ್ಲಿ ಸಹಾಯಕ ನಿರ್ದೇಶಕರು, ಪಶು ವೈದ್ಯ ಸೇವೆಗಳು ಒಂದು ಹುದ್ದೆ ಮಾತ್ರ ಇದ್ದು, ಕರ್ನಾಟಕ ಮೃಗಾಲಯ ಪ್ರಾಧಿಕಾರದ ಆಡಳಿತ ಮಂಡಳಿಯ 119ನೇ ಸಭೆಯಲ್ಲಿ ಒಪ್ಪಿಗೆ ನೀಡಿರುವಂತೆ ಸದರಿ ಸಂಸ್ಥೆಗೆ ಉಪ ನಿರ್ದೇಶಕರು, ಪಶು ವೈದ್ಯ ಸೇವೆಗಳು ಒಂದು ಹುದ್ದೆಯನ್ನು ಕರಡು ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಸೃಜಿಸಿ, ಆದೇಶ ಹೊರಡಿಸಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದು, ಉದ್ಯಾನವನದ ಹಿತ ದೃಷ್ಟಿಯಿಂದ ಸದರಿ ಹುದ್ದೆಯು ಅತೀ ಅವಶ್ಯಕವಾಗಿದ್ದು, ಸರ್ಕಾರದ ಮಂಜೂರಾತಿಯು ಅವಶ್ಯಕವಾಗಿರುವುದರಿಂದ ಸದರಿಯವರ ನಿಯೋಜನೆಯನ್ನು ಅಂಗೀಕರಿಸಿ, ಮರು ನೇಮಕಾತಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಈ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 55 ಎಫ್‌ಪಿಸಿ 2012 ಬೆಂಗಳೂರು, ದಿನಾಂಕ: 30.07.2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು ಕಾರ್ಯನಿರ್ವಾಹಕ ನಿರ್ದೇಶಕರ ಕಚೇರಿ, ಬನ್ನೇರುಘಟ್ಟ ಜೈವಿಕ ಉದ್ಯಾನವನ, ಬನ್ನೇರುಘಟ್ಟ, ಬೆಂಗಳೂರು ಇಲ್ಲಿ ಒಂದು ಪಶು ವೈದ್ಯ ಸೇವೆಗಳ ಉಪ ನಿರ್ದೇಶಕರ ಹುದ್ದೆಯನ್ನು ತಾತ್ಕಾಲಿಕವಾಗಿ ದಿನಾಂಕ: 21.05.2012 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಸೃಜಿಸಲಾಗಿದೆ.

ಸದರಿ ಪ್ರಸ್ತಾವನೆಗೆ ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿ ಸಂಖ್ಯೆ: FD 764 EXP.5/2012, ದಿನಾಂಕ: 12.07.2012 ರಲ್ಲಿ ನೀಡಿರುವ ಸಹಮತಿಯೊಂದಿಗೆ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಮಾದೇವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ಪಿ.ಆರ್. 1973**

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮದಿಂದ ಅರಣ್ಯ ಇಲಾಖೆಗೆ ಸುಮಾರು 35000 ಹೆ. ನಷ್ಟು ನೆಡುತೋಪು ಕ್ಷೇತ್ರಗಳನ್ನು ಹಿಂತಿರುಗಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಅಪಜೀ 116 ಎಫ್‌ಪಿಸಿ 2011, ದಿನಾಂಕ: 17–02–2012.
2) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ ಇವರ ಪತ್ರದ ಸಂಖ್ಯೆ: ಕಅಅನಿನಿ/ಎ5/ ಅಪ್ರಹಿ/ಸಿಆರ್–226/2011–12/503, ದಿನಾಂಕ: 24–05–2012.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 17–02–2012ರ ಆದೇಶದಲ್ಲಿ ಸರ್ಕಾರವು ನೀಲಗಿರಿ ಹಾಗೂ ಅಕೇಶಿಯಾ ನೆಡುತೋಪುಗಳನ್ನು ಅರಣ್ಯ ಜಮೀನುಗಳ ಮೇಲೆ ಬೆಳೆಸುವುದನ್ನು ನಿಷೇಧಿಸಿರುವ ಹಾಗೂ ಅದರ ಪರಿಣಾಮ ಸ್ವರೂಪವಾಗಿ 35000 ಹೆಕ್ಟೇರ್ ಅರಣ್ಯ ಜಮೀನನ್ನು ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮವು ಅರಣ್ಯ ಇಲಾಖೆಗೆ ಹಿಂತಿರುಗಿಸುವ ಕಾರಣದಿಂದ ಈಗಾಗಲೇ ಕಟಾವಿಗೆ ಸಿದ್ಧವಾಗಿರುವ ನೆಡುತೋಪುಗಳಿಂದ ಮೆದುಮರ ತೆಗೆದುಕೊಂಡು ಖಾಲಿ ಜಾಗವನ್ನು ಅರಣ್ಯ ಇಲಾಖೆಗೆ ಹಸ್ತಾಂತರಿಸುವುದಲ್ಲದೆ ಮೆದುಮರ ಇರುವಂತಹ ನೆಡುತೋಪುಗಳನ್ನು ಕೂಡ ಮೌಲ್ಯಮಾಪನ ಮಾಡಲು ಅಧಿಕಾರಿಗಳು ಹಾಗೂ ಇಲಾಖಾ ವತಿಯಿಂದ ಇಬ್ಬರು ಹಿರಿಯ ಅಧಿಕಾರಿಗಳನ್ನು ನೇಮಕ ಮಾಡುವುದರ ಮೂಲಕ ಜಂಟಿಯಾಗಿ ಮೌಲ್ಯಮಾಪನ ಕಾರ್ಯಕ್ರಮವನ್ನು ಮಾಡಲು ಒಂದು ಸಮಿತಿಯನ್ನು ರಚಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ದಿನಾಂಕ: 24–05–2012ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ: 17–02–2012ರ ಆದೇಶದಲ್ಲಿ ರಚಿಸಲಾದ ಸಮಿತಿಯ ಅಧ್ಯಕ್ಷರಾಗಿದ್ದ ಶ್ರೀ ವಿರೇಂದ್ರ ಸಿಂಗ್, ಭಾಅಸೇ., ರವರು ವರ್ಗಾವಣೆ ಹೊಂದಿರುವುದರಿಂದ ಸಮಿತಿಯನ್ನು ಪುನರ್ ರಚಿಸಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 59 ಎಫ್‌ಪಿಸಿ 2012 ಬೆಂಗಳೂರು. ದಿನಾಂಕ: 23/07/2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರವು ನೀಲಗಿರಿ ಹಾಗೂ ಅಕೇಶಿಯಾ ನೆಡುತೋಪುಗಳನ್ನು ಅರಣ್ಯ ಜಮೀನುಗಳ ಮೇಲೆ ಬೆಳೆಸುವುದನ್ನು ನಿಷೇಧಿಸಿರುವ ಹಾಗೂ ಅದರ ಪರಿಣಾಮ ಸ್ವರೂಪವಾಗಿ 35000 ಹೆಕ್ಟೇರ್ ಅರಣ್ಯ ಜಮೀನನ್ನು ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮವು ಅರಣ್ಯ ಇಲಾಖೆಗೆ ಹಿಂತಿರುಗಿಸುವ ಕಾರಣದಿಂದ ಈಗಾಗಲೇ ಕಟಾವಿಗೆ ಸಿದ್ಧವಾಗಿರುವ ನೆಡುತೋಪುಗಳಿಂದ ಮೆದುಮರ ತೆಗೆದುಕೊಂಡು ಖಾಲಿ ಜಾಗವನ್ನು ಅರಣ್ಯ ಇಲಾಖೆಗೆ ಹಸ್ತಾಂತರಿಸುವುದಲ್ಲದೆ ಮೆದುಮರ ಇರುವಂತಹ ನೆಡುತೋಪುಗಳನ್ನು ಕೂಡ ಮೌಲ್ಯಮಾಪನ ಮಾಡಲು ರಚಿಸಲಾಗಿದ್ದ ಸಮಿತಿಯನ್ನು ಈ ಕೆಳಗಿನಂತೆ ಪುನರ್ ರಚಿಸಿ ಆದೇಶಿಸಿದೆ:–

**ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮದ ವತಿಯಿಂದ**

1. ಜಂಟಿ ಕಾರ್ಯ ನಿರ್ವಾಹಕ ನಿರ್ದೇಶಕರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು. – ಅಧ್ಯಕ್ಷರು
2. ವಿಭಾಗೀಯ ವ್ಯವಸ್ಥಾಪಕರುಗಳು ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ, ಧಾರವಾಡ/ಶಿವಮೊಗ್ಗ/ಚಿಕ್ಕಮಗಳೂರು, ಕೋಲಾರ. – ಸದಸ್ಯರು

**ಅರಣ್ಯ ಇಲಾಖೆಯ ವತಿಯಿಂದ**

1. ಶ್ರೀಮತಿ ಸೀಮಾ ಗರ್ಗ್, ಭಾ.ಅ.ಸೇ., – ಸದಸ್ಯರು
2. ಶ್ರೀ ಪುನೀತ್ ಪಾಠಕ್, ಭಾ.ಅ.ಸೇ., – ಸದಸ್ಯರು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಮಾದೇವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ಪಿ.ಆರ್. 2000**

## ಇಂಧನ ಸಚಿವಾಲಯ

**ವಿಷಯ** : ಮೆ: ಕಾವೇರಿ ಕಾಫಿ ಟ್ರೇಡರ್ಸ್, ಕಂಪನಿಯವರು ಅನುಷ್ಠಾನಗೊಳಿಸಿರುವ 0.8 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: ಶ್ರೀ ವೆಂಕಟಾದ್ರಿ ಮಿನರಲ್ಸ್, ರವರಿಗೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 76 ಎನ್‌ಸಿಇ 2005, ದಿನಾಂಕ : 18–3–2005,
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 203 ಎನ್‌ಸಿಇ 2005, ದಿನಾಂಕ ; 25–7–2005,
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : KRED/08/SVM-0.8MW/ (Cauvery Coffee/2012/1729, ದಿನಾಂಕ : 26–6–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಮೆ: ಎನರ್ಕಾನ್ ಇಂಡಿಯಾ ಲಿಮಿಟೆಡ್ ರವರಿಗೆ ಚಿತ್ರದುರ್ಗ ಜಿಲ್ಲೆಯ ಜೋಗಿಮಟ್ಟಿ ಪ್ರದೇಶದಲ್ಲಿ 192 ಮೆ.ವ್ಯಾ. ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಸರ್ಕಾರಿ ಆದೇಶದಲ್ಲಿ ಮೆ: ಎನರ್ಕಾನ್ ಇಂಡಿಯಾ ಲಿಮಿಟೆಡ್ ರವರಿಗೆ ಮೇಲಿನ ಆದೇಶದಲ್ಲಿ ಹಂಚಿಕೆಯಾಗಿದ್ದ 192 ಮೆ.ವ್ಯಾ ಪವನ ವಿದ್ಯುತ್ ಯೋಜನೆಯಲ್ಲಿ ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನ ಗೂಳಿಹೊಸಹಳ್ಳಿ ಗ್ರಾಮದಲ್ಲಿನ 0.8 ಮೆ.ವ್ಯಾ. ಸಾಮರ್ಥ್ಯವನ್ನು ಮೆ. ಕಾವೇರಿ ಕಾಫಿ ಟ್ರೇಡರ್ಸ್, ರವರಿಗೆ ವರ್ಗಾಯಿಸಿ ಆದೇಶಿಸಲಾಗಿರುತ್ತದೆ. ಈ ಯೋಜನೆಯು ದಿನಾಂಕ : 31–3–2006ರಂದು ಅನುಷ್ಠಾನಗೊಂಡಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಮೆ: ಕಾವೇರಿ ಕಾಫಿ ಟ್ರೇಡರ್ಸ್, ಕಂಪನಿಯವರು ಅನುಷ್ಠಾನಗೊಳಿಸಿರುವ 0.8 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: ಶ್ರೀ ವೆಂಕಟಾದ್ರಿ ಮಿನರಲ್ಸ್, ರವರಿಗೆ ವರ್ಗಾಯಿಸುವ ಕುರಿತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಹಾಗೂ ಈ ಯೋಜನಾ ಸ್ಥಳವು ಸರ್ವೆನಂ. 21ರ 1.07 ಹೆಕ್ಟೇರ್ ಅರಣ್ಯ ಭೂಮಿಯಾಗಿದೆಯೆಂದು, ಉತ್ಪಾದನೆಯಾಗುವ ವಿದ್ಯುತ್ತನ್ನು ಸರಬರಾಜು ಮಾಡಲು ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ವಿದ್ಯುತ್ ಖರೀದಿ ಒಪ್ಪಂದವನ್ನು ಮಾಡಿಕೊಳ್ಳುವುದಾಗಿ ಅಭಿವೃದ್ಧಿದಾರರು ತಿಳಿಸಿರುತ್ತಾರೆಂದು ವರದಿ ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 194 ಎನ್‌ಸಿಇ 2012, ಬೆಂಗಳೂರು, ದಿನಾಂಕ : 13–7–2012.**

ಮೆ: ಮೆ: ಕಾವೇರಿ ಕಾಫಿ ಟ್ರೇಡರ್ಸ್, ಕಂಪನಿಯವರು ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನ ಗೂಳಿಹೊಸಹಳ್ಳಿ ಗ್ರಾಮದಲ್ಲಿ ಅನುಷ್ಠಾನಗೊಳಿಸಿರುವ 0.8 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: ಶ್ರೀ ವೆಂಕಟಾದ್ರಿ ಮಿನರಲ್ಸ್, ರವರಿಗೆ ಈ ಕೆಳಕಂಡ ಷರತ್ತಿಗೊಳಪಟ್ಟು ವರ್ಗಾಯಿಸಲು ಅನುಮೋದಿಸಿದೆ :–

1. ಮೆ: ಶ್ರೀ ವೆಂಕಟಾದ್ರಿ ಮಿನರಲ್ಸ್, ರವರು 15 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ : ಇಎನ್ 435 ಎನ್‌ಸಿಇ 2011, ದಿನಾಂಕ: 6–1–2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
2. ಮೆ: ಶ್ರೀ ವೆಂಕಟಾದ್ರಿ ಮಿನರಲ್ಸ್, ರವರು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ವಿದ್ಯುತ್ ಖರೀದಿ ಒಪ್ಪಂದವನ್ನು ಮಾಡಿಕೊಳ್ಳತಕ್ಕದ್ದು.
3. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೌಸಲ್ಯಾ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ಪಿ.ಆರ್. 2038**

## COMMERCE & INDUSTRIES SECRETARIAT

**SUB :** Approval to the Project proposal of M/s J.K. Cement (Western) Limited to establish Manufacture of "OPC, PPC, PSC Cement" at Mudbole, Chittapur Village of Gulbaraga District.

**READ :** Proceedings of the 28th State High Level Clearance Committee (SHLCC) meeting held on 23-5-2012.

**Preamble :**

M/s J.K. Cement (Western) Limited has proposed to establish a "OPC, PPC, PSC Cement unit" at Mudbole, Chittapur Village, Gulbaraga District, with an inverstment of Rs. 2326.65 Crores, generating employment to about 350 persons.

In the 28th State High Level Clearance Committee (SHLCC) Meeting held on 23-5-2012, the proposal of the Company was discussed and approved.

Government has examined the recommendations made by the State High Level Clearance Committee in the 28th Meeting held on 23-5-2012, in all aspects.

Hence the following order.

### GOVERNMENT ORDER NO. CI 168 SPI 2012, BANGALORE, DATED : 25-5-2012.

Government is pleased to accord in principle approval to the Project Proposal of M/s J.K. Cement (Western) Limited has proposed to establish a "OPC, PPC, PSC Cement unit" at Mudbole, Chittapura Village, Gulbaraga District, with an investment of Rs. 2326.65 Crores, generating employment to about 350 persons and extend following infrastructure facilities, incentives and concessions.

**INFRASTRUCTURE FACILITIES :**

**Land :** 1500 acres of land for Mining in different Sy.Nos at Margole Village and Mudbole, Chittapur Village Gulbarga District for Cement and Power Plant to be purchases under section 109 of the KLR act. The committee directed Mines and Geology Department to assess the exact mining and plant area required when considering license. The details of survey numbers are given below :

Land for mining at Sy. Nos. 13 to 114 of 1st Block & 117 to 179 of 2nd Block of Margole Village & for Cement & Power plant at Sy. Nos. 2, 23, 28, 34, 35, 36, 37, 38, 39, 43, 44, 45, 46, 47, 48, 49, 50, 51, 52, 53, 54, 55, 56, 57, 62, 63, 65, 66, 67, 68, 69, 70, 71, 72, 73, 74, 75, 76 of Mudbole Village & Sy. No. 108, 109, 110,111, 112, 113, 114, 115, 116 & 117 of Chittapur village Gulbarga District.

**Water :** 40 lakh LPD, source Kagina river. The project proponent to file separate application to WRD.

**Power :** 50000 KVA to serviced by GESCOM.

**Incentives & Concessions :** As per applicable Industrial Policy of the State.

**Statutory** : **clearances :** The promoters to take necessary statutory Clearances.

**GENERAL TERMS AND CONDITIONS :**

1. **Environment** : The Promoters as to obtain CFE from KSPCB Enviromental clearance from MOEF, GOI/DFEE GOK as applicable..

2. **Employment :** The Company shall prepare a plan for development of Human Resources required for the project, train local people and provide employment to these trained local youth and comply with the provisions of Industrial Policy of Govt. of Karnataka. A copy of Human Resources Development plan shall be sent to the Commissioner for I,D. & Director of Industries and Commerce for monitoring.

3. **Vendor Development :** Where ever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.

4. **Social Infrastructure Development :** The Company is advised to take up social infrastructure development projects in the vicinity of the proposed location of the Unit. A copy of such projects shall be sent to the Commissioner for I.D. & Director of Industries and Commerce for monitoring.

5. **Others :**
   a) The Project proponents to give employment to the family members of the land losers, one for each family as far as possible.
   b) The project proponents shall adopt rainwater harvesting, waste water recycling and water conservation techniques. Zero discharge facility should be adopted wherever applicable.
   c) The promoters shall take all statutory and other necessary clearances from the competent authorities including GOI and shall submit milestones/progress in implementation of the project regularly, which will be monitored by the Department.

This approval is valid for a period of two years from the date of obtaining permission U/s 109 KLR from the Deputy Commissioner/Government as the case may be.

By Order and in the name of the Governor of Karnataka,
**JYOTHI R.J.**
Desk Officer (Technical Cell)
Commerce & Industries Department.

**P.R. 1760**

## ಇಂಧನ ಸಚಿವಾಲಯ

## ತಿದ್ದುಪಡಿ

## ಸಂಖ್ಯೆ : ಇಎನ್ 121 ಎನ್‌ಸಿಇ 2011, ಬೆಂಗಳೂರು, ದಿನಾಂಕ : 9–8–2012

ಮೆ: ವಿಜಯಲಕ್ಷ್ಮಿ ಹೈಡ್ರೋ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಚಿತ್ರದುರ್ಗ ಜಿಲ್ಲೆಯ ಅಯ್ಯನಹಳ್ಳಿ, ಕೊದುರು, ಕಲಗಟ್ಟ, ವಿಶ್ವನಾಥಹಳ್ಳಿ, ದಾಸರಹಳ್ಳಿ, ನಂದಿಹಳ್ಳಿ ಗ್ರಾಮಗಳಲ್ಲಿ 15.00 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಿರುವ ಸರ್ಕಾರಿ ಆದೇಶ ಸಂಖ್ಯೆ : ಇಎನ್ 121 ಎನ್‌ಸಿಇ 2011 ದಿನಾಂಕ : 13–3–2012ರ ಆದೇಶ ಭಾಗದಲ್ಲಿ ನಮೂದಿಸಲಾಗಿರುವ ಈ ಕೆಳಕಂಡ ಶೆಡ್ಯೂಲ್‌ಗೆ

| Sl. No. | Topo Sheet No. | Proposed capacity in MW | Near by villages of the proposed area and district | Geographical area description of the project |
|---|---|---|---|---|
| 1. | 57 B/7 | 15 MW (30 Nos x 500 KW) | Donehalli, Akkanuru, Honnamardi, Gaurammanahalli, Toranagatti villages of Chitradurga District | Identification area is ground level plain would be having agricultural activities. The NH 13 runs disagonally in the area along with power lines, the area is situated on the South of Donehalli and East of Torangatti has gentle elevation varying from 640 to 680 Mt.,. Further, it has water body and a stream runs across is called as janagahalli and held in the following Geographical co-ordinates :<br>Latitude : $14^0$46'07". $13^0$50'10"N<br>Longitude : $77^0$10'51", $77^0$15'0"E<br>Ridge peaks : 672, 644,661,632, 638 & 664 Amsl. |
| | | **15.00 MW** | | |

ಬದಲಾಗಿ

| Sl. No. | Topo Sheet No. | Proposed capacity in MW | Near by villages of the proposed area and district | Geographical area description of the project. |
|---|---|---|---|---|
| 1. | 57 B/4 | 15 MW (30 Nos x 500 KW) | Ayyanahalli, Koduru, Kalagatta, Viswanathanahalli, Dasarahalli, Nandihalli Villages of Chitraduraga District. | A ground level plain has been proposed which is comprising of water bodies and scattered vegetation, Further, the part of area presence of coconut plantation and Boulders. The districts in Highway runs across the area. It has gentle elevation varying form 640 mt to 660 mt. The entire area is located on East of Santhe Bennur and around Dodda Habigeri, Nodihalli and Dondiganahalli.<br>The proposed area is covered in the following Geographical co-ordinaters:<br>Latitude : $14^0$8'4". $14^0$11'53"N<br>Longitude : $76^0$1'47", $76^0$5'0"E<br>Ridge peaks : 689, 654, 646 & 696 Amsl. |
| | | **15.00 MW** | | |

ಎಂಬುದಾಗಿ ಮತ್ತು ಕ್ರಮ ಸಂಖ್ಯೆ : (8)ರಲ್ಲಿ ನಮೂದಿಸಲಾಗಿರುವ

ಅಭಿವೃದ್ಧಿದಾರರು ಈ ಯೋಜನೆಯನ್ನು 2013–14ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು ಹಾಗೂ ಅದರಂತೆ, ಕೆ.ಆರ್.ಇ.ಡಿ.ಎಲ್.ಗೆ ಮುಚ್ಚಳಿಕೆ ಬರೆದುಕೊಡತಕ್ಕದ್ದು.

ಎಂಬುದರ ಬದಲಾಗಿ

ಮತ್ತು ಅಭಿವೃದ್ಧಿದಾರರು ಈ ಯೋಜನೆಯನ್ನು ಕ್ರಮ ಸಂಖ್ಯೆ (1)ರಲ್ಲಿ ಸೂಚಿಸಿದಂತೆ 3 ವರ್ಷದ ಅವಧಿಯೊಳಗೆ ಅನುಷ್ಠಾನಗೊಳಿಸುವುದಾಗಿ ಕೆ.ಆರ್.ಇ.ಡಿ.ಎಲ್. ಗೆ ಮುಚ್ಚಳಿಕೆ ಬರೆದುಕೊಡತಕ್ಕದ್ದು.

ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**ಪಿ.ಆರ್. 1972**

## ENERGY SECRETARIAT

**SUB :** Formation of PPP Cell in the Energy Department for undertaking projects under Public Private Partnerships-reg.

**READ :**
1. PPP Concept Note from M/s Deloitte
2. Meeting held on 26-6-2012 chaired by Chief Secretary to Govt. and proceedings of IDD

**Preamble :**

1. M/s DELOITTE, the consultants engaged by the Infrastructure Development Department (IDD) for assistance to the Energy Department has proposed the structure of Public Private Partnership Cell in the Energy Department in the Concept Note. The creation of the PPP Cell is a mandate as per the terms of reference set by IDD.

2. Meeting held on 26-6-2012 chaired by Chief Secretary to Govt. and proceedings of meeting indicate the need for creation of the public private partnership Cell in the Energy Department.
3. In the changed global project development scenario, which requires an acceleration of infrastructure development, Public Private Partnerships (PPPs) are expected to provide optional and new solutions for development of major projects in the State.
4. The power sector projects are increasingly large and complex in nature and require large investments and technology. The State Government will be hard pressed to invest in such projects. As an owner of the Public sector undertakings, if may extend extemal support for borrowings by the Utillities due to several constraints.
5. For the projects developed by the State Utillities, State Govt. support is necessary in the form of infusion of the equity for facilitating favourable Debt Equity Ratio. Demonstrating favourable Debt Equity Ratio (DE Ratio) is essential for the utilities for enabling the power sector utillites to go for borrowings. The State Government may not be in a position to financially support for infusion of equity to facilitate power sector utilities to go in for major projects on its own. Such a scenario necessitates opting for PPP model for projects development, private sector bring in capital & technology.
6. PPP project can succeed only it risk sharing mechanisms are well balanced. Such groundwork requires that any projects being conceptualized are closely monitored and sustained across its development lifecycle. This would ensure that the contours of the project succeeding multi-fold.
7. The PPP Cell will become a key instrument in ensuring that all major projects emanating from the department are carefully evaluated and appropriate decision can be taken as to whether the project should be undertaken under PPP model or otherwise.
8. In view of the circumstances explained above, it is proposed to create public Private Partnership Cell in the Energy Department and hence this order.

**GOVERNMENT ORDER NO. EN 50 PSR 2012, BANGALORE, DATED : 10-7-2012.**

1. Government of Karnataka, Department of Energy is pleased to approve the formation of the PPP Cell in the Energy Department to take up the infrastructure projects of the Department in Public Private Partnership model in the power Sector of the State. The Public Private Partnership Cell in the Energy Department shall have a two tier structure as follows
I. PPP Cell Empowered Committee,

II. PPP EXECUTIVE CELL

I. The composition of the PPP Cell Empowered Committee consists of the following members :

| | | |
|---|---|---|
| 1. | Principal Secretary, Energy Dept. | Chairman |
| 2. | Managing Director, KPTCL, | Member |
| 3. | Managing Director, KPCL, | Member |
| 4. | Managing Director, BESCOM | Member |
| 5. | Managing Director, MESCOM | Member |
| 6. | Managing Director, HESCOM | Member |
| 7. | Managing Director, GESCOM | Member |
| 8. | Managing Director, CESC | Member |
| 9. | Managing Director, PCKL | Member |
| 10. | Managing Director, KREDL | Member |
| 11. | Director (Transmission), KPTCL, | Member |
| 12. | Executive Director-Finance, KPCL | Member |
| 13. | Deputy Secretary, Energy Dept. | Convenor |

II. The composition of the PPP Cell Executive Committee shall be responsible for development, management of the bid process & monitoring of the project implementation through its development lifecycle and consists of the following members :

PPP EXECUTIVE CELL

| | | |
|---|---|---|
| 1. | Managing Director PCKL | Chief Executive Member |
| 2. | H.L. Mukunda, Controller (Costing & Taxation) | Executive Member |
| 3. | M.D. Ravi, Special Officer (Reforms) | Enegy Dept. Executive Member |
| 4. | M.S. Prabhakar, SEE, T & P, KPTCL | Executive Member |
| 5. | V. Govindaraju, SEE, Trnsn Zone, KPTCL | Executive Member |
| 6. | Vishwanath, SEE Project, KPCL | Executive Member |
| 7. | K. Govindaraju, Executive Engineer, EMC | Executive Member & Convenor |
| 8. | Hiriyannaiah, Executive Engineer, EMC | Executive Member |
| 9. | N. Suresh, Executive Engineer, CESC | Executive Member |
| 10. | Prabhakar, Executive Engineer, KREDL | Executive Member |
| 11. | Bharatheesh Rao, Exe. Engineer, PCKL | Executive Member |
| 12. | Sureshkumar, Exe. Engineer, SCADA, LDC, | Executive Member |
| 13. | Prakashkumar, DGM-IT & MIS, BESCOM | Executive Member |
| 14. | Madhusudan, Deputy Controller, P&G Trust | Executive Member |

2. The PPP Cell shall have the following objectives :

   i. Create a shelf of PPP Projects within the Energy Department.

   ii. Review the projects identified under the PPP Model

   iii. Monitoring and supervising the projects under development.

   iv. Facilitate projects in accessing various government support.

   v. Deliberate on the policy framework for ensuring investments in the state through PPP model.

3. The PPP Cell would report to the Chairman of the PPP Cell. The PPP Cell is expected to undertake the following activities:

   I. Identification, conceptualisation and creation of a shelf of projects for generation, transmission, distribution and Renewable energy sectors.

   II. Assistance to the respective utilities in preparing pre feasibility reports for identified projects.

   III. Recommend approval of suitable projects for implementation on PPP route based on analysis.

   IV. Recommend projects to Government of Karnataka and Government of India for grants under Viability Gap Funding Scheme.

   V. Assist in preparation and appraisal of Detailed Project Reports.

   VI. Conduct and assist the utilities in managing the bidding process for selection of developers.

   VII. Develop internal evaluation guidelines in consultation with the respective agencies to evaluate and assess whether the projects are to be funded by the own budget, State Government or implemented through PPP.

   VIII. Inspect, visit, review and monitor PPP Projects under implementation

   IX. Institute an overall Monitoring and Evaluation framework for the PPP projects and programs in the Enery Sector.

4. The PPP Cell shall also have the following additional function to discharge in facilitiating projects implementation under PPP Model.

   i. Facilitate project placement under appropriate government schemes. The cell would facilitate the placement of any project under appropriate government schemes like the Viability Gap Funding (centre or state), Project approval by state and centre under PPP mode etc.,

ii. To enable this facilitation, the members within the cell are identified and made responsible for coordinating on various government schemes.

iii. There may be instances where the success of a project would hinge on a supporting policy framework. The cell would deliberate on the necessary policy interventions that are required to ensure that the project proceeds for implementation without hurdles and supporting policy environment is developed.

iv. Nominate officers for exposure visits and training in order to streamline PPPs in the department, it is imperative that a host of officers dealing with projects are exposed to the fundamentals of PPP and are also aware of what is required for a PPP project to succeed. In order to build capacities of the officers across various line departments/boards. The PPP cell would, from time to time, nominate officers for exposure vistis and training on PPPs.

v. In the initial phase of formation, the PPP Cell meets once every two weeks so that progress on existing projects can be tracked as well as shelf creation and other activities are taken up on a regular basis.

vi. The PPP cell can internally deliberate and fix a schedule of meetings as it deems appropriate. Minutes of the Meeting shall be recorded for every meeting and would be circulated to all members of the cell as well as to key officers of the department.

vii. The PPP cell assignment is an additional work in addition to the regular work. The specific work assignment for the executive committee members will be done as and when projects are taken up under PPP model.

By Order and in the name of the Governor of Karnataka,

**KOUSALYA**

Under Secretary to Government

Energy Department.

**P.R. 2046**

## HEALTH AND FAMILY WELFARE SECRETARIAT

**SUB :** Hiring of Programme Co-ordinator for Road Safety and Emergency Healthcare Services Programme-reg.

**Preamble :**

Injuries have emerged as a major public health problem in India with increasing number of vehicles and improving infrastructure. As per the recent estimate road traffic accidents have increased at the rate of 8% per annum. Road traffic deaths and injuries from many of the southern states like Kerala, Tamil Nadu and Karnataka are much higher than the national averages.

The State of Karnataka, KHSDRP and the World Bank have agreed to develop road safety capacity in the health sector by developing a road safety plan for the health sector, for improving emergency (pre hospital) and trauma care practices to improve rehabilitation services, to establish new injury information system, to develop appropriate communication systems, to strengthen the telemedicine services and to strengthen the monitoring and evaluation of road safty activities in the health sector. In addition, the KHSDRP team needs to work closely with the Road Safety Cell of the State and with the KSHIP team when implementing this component. The activities planned includes:

- A comprehensive literature search to be conducted to indentify the existing knowledge and the sources of data in the pilot districts.
- Assessment of the magnitude of the road traffic injury problem (to provide information on RTIs by place, time, person affected along with known risk factors for both deaths and injuries) in the pilot districts Identification and analysis of the locations of road traffic accidents in the 3 pilot districts with more detailed information on the identified safety corridors.
- To develop a comprehensive information system in which concerned departments make entries to ensure tracking of each road traffic accident victim.
- Preparing guidelines, minimum standards for PHC, Taluk and District hospitals to manage/transfer RTA victims.

- Documentation of the current status of pre-hospital and in-hospital facilities regarding emergency health services (ii) emergency ambulance services in terms of location, (EMRI amubulance service and other available private services), (iii) telemedicine usage (iv) blood bank and storage services.
- Training all health care personnel of the safety corridor districts in trauma care specifically to improve the quality of diagnosis, treatment, timely referral and follow up.
- Identification/documentation of the status of enforcement and existing barriers for improved enforcement on the two safety corridors using quantitative and qualitative analysis.
- Understanding of the perceptions/knowledge/practices of road users and stake holders with regard to safety on the selected safety corridors.
- Supporting development of targeted communication strategies for implementing road safety in collaboration with KSHIP.

To assist the State Programme Officer in conducting activities as above and to monitor the programme road safety programme co-ordinators are proposed to be taken on contract basis.

An EoI was invited from individuals under CQS procedure of the World Bank for procurement to the post of Programme Co-ordinator for Road Safety and Emergency Healthcare Services Programme. The same was published in Vijaya Karnataka and Deccan Herald dt. 22-3-2012. In response to this, 23 applications were received for the post. Out of 23 EoIs, 6 have been disqualified. 17 cadidates were called for the interview on 10-5-2012. 12 candidates have appeared for the interview. 4 candidates have been recommended for selection on merit basis for a monthly remuneration of Rs. 25,000-00 per month on contract basis.

The Secretary, Health and Family Welfare Department and Chairman, Programme Steering Committee has approved the proposal on file subject to the ratification by the PSC.

Hence the following order.

**Govt. Order No. HFW/KHSDRP/PHCF/RTA/PC 24/11-12, Bangalore, Dated : 3-7-2012.**

Under the circumstances mentioned in the preamble, Government are pleased to appoint the following Programme Co-ordinators for Road Safety and Emergency Healthcare Service Programme at a remuneration of Rs. 25,000-00 (Rupees twenty five thousand only) per month for a period of one year.

1. Sri Manju M.
2. Dr. Bhimagouda H. Patil.
3. Sri Suresh K.
4. Sri. Ashraf D.

The consultant shall enter into an agreement with the Project which will include the ToR. The consultant shall carryout the assignments as per the responsibilities prescribed.

The above expenditure shall be debited to the Head of Account “2210-06-112-0-02(P)-051 General Expenses” during the year 2012-13.

By Order and in the name of the Governor of Karnataka,

**K.N. RAMESH**

Deputy Secretary to Govt (I/c)

KHSDRP

Health and Family Welfate Department.

**P.R. 2011**